ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಬೀದರ್ ಜಿಲ್ಲೆಯಲ್ಲಿ ಸಮರ್ಪಕ ವಿದ್ಯುತ್ ನೀಡುವ ಕುರಿತು

ಶ್ರೀ ವಿಜಯ ಸಿಂಗ್(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

374 (454) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರೈತರ ಬೆಳೆಗಳಿಗೆ ಸಮರ್ಪಕವಾಗಿ ವಿದ್ಯುತ್ ದೊರೆಯುತ್ತಿಲ್ಲವಾದ್ದರಿಂದ ಬೆಳೆಗಳು ನಾಶವಾಗುತ್ತಿದ್ದು ಹೆಚ್ಚಿನ ವಿದ್ಯುತ್ ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು;

(ಆ) 2016 ರಿಂದ 2020ರವರೆಗೆ ಬೀದರ್ ಜಿಲ್ಲೆಯಲ್ಲಿ ಬಾವಿ/ಕೊಳವೆ ಬಾವಿಗಳ ಸಂಪರ್ಕಕ್ಕೆ ಅರ್ಜಿ ಸಲ್ಲಿಸಿರುವ ರೈತರ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) ಬಂದಿರುವ ಅರ್ಜಿಗಳ ಪೈಕಿ ಎಷ್ಟು ರೈತರಿಗೆ ಸಂಪರ್ಕ ನೀಡಲಾಗಿದೆ; ವಿಳಂಬಕ್ಕೆ ಕಾರಣವೇನು; (ತಾಲ್ಲೂಕುವಾರು ಮಾಹಿತಿ ನೀಡುವುದು)

(ಇ) ಬೀದರ್ ಜಿಲ್ಲೆಯಲ್ಲಿ ಎಷ್ಟು ಕಡೆಗಳಲ್ಲಿ ಸೋಲಾರ್ ಘಟಕಗಳಿಗೆ ಅನುಮತಿ ನೀಡಲಾಗಿದೆ; ಸೋಲಾರ್ ಘಟಕದಿಂದ ಇಲಾಖೆ ಪಡೆಯುತ್ತಿರುವ ವಿದ್ಯುತ್ ಎಷ್ಟು; ಇದಕ್ಕಾಗಿ ವಾರ್ಷಿಕ ಅನುದಾನ ಎಷ್ಟು ಖರ್ಚಾಗುತ್ತಿದೆ? (ಮಾಹಿತಿ ನೀಡುವುದು)